## ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 1176
**ಸದಸ್ಯರ ಹೆಸರು** : ಕೆ. ಹರೀಶ್ ಕುಮಾರ್ ( ವಿಧಾನ ಸಭೆಯಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : ದಿನಾಂಕ:07.03.2022
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಇತ್ತೀಚಿನವರೆಗೆ ಎಷ್ಟು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಅಗ್ನಿಶಾಮಕ ಇಲಾಖೆಯಿಂದ ಅಗ್ನಿ ಸುರಕ್ಷತಾ ಸಲಹಾ ಪತ್ರ (Advisory Certificate) ಸಮಾಪನ ಪತ್ರ (compliance certificate) ಪಡೆಯಲಾಗಿದೆ; (ಶಾಲೆಗಳ ಹೆಸರು ಸಹಿತ ಜಿಲ್ಲಾವಾರು ಮಾಹಿತಿ ನೀಡುವುದು) | ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಕಟ್ಟಡಗಳು ಸರ್ಕಾರಿ ಸ್ವಾಮ್ಯದ ಕಟ್ಟಡಗಳಾಗಿರುವುದರಿಂದ ಈ ಕಟ್ಟಡಗಳ ಕಾಮಗಾರಿಯನ್ನು ಸರ್ಕಾರದಿಂದ ಮಾನ್ಯತೆ ಪಡೆದ ಅಭಿಯಂತರರಿಂದ ಪ್ರಮಾಣಿಕರಿಸಲಾಗಿರುತ್ತದೆ. ಜೊತೆಗೆ ಹೆಚ್ಚಿನ ಕಟ್ಟಡಗಳು ನೆಲಮಹಡಿಯಲ್ಲಿದ್ದು, ಸದರಿ ಕಟ್ಟಡಗಳನ್ನು ಮಕ್ಕಳ ಸುರಕ್ಷತೆ ಕುರಿತಂತೆ ಮುಂಜಾಗ್ರತಾ ಕ್ರಮಗಳನ್ನು ವಹಿಸಿ ನಿರ್ಮಿಸಲಾಗುವುದರಿಂದ ಅಗ್ನಿ ಸುರಕ್ಷತೆಯ ಬಗ್ಗೆ ಯಾವುದೇ ಹೆಚ್ಚಿನ ಕ್ರಮವಹಿಸಲಾಗಿರುವುದಿಲ್ಲ. ಅಗ್ನಿ ಸುರಕ್ಷತೆಯ ಅವಶ್ಯಕತೆಯು ಬಹುಮಹಡಿ ಕಟ್ಟಡಗಳಿಗೆ ಅನ್ವಯವಾಗುತ್ತಿದ್ದು, ಈ ಸಂಬಂಧ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಕನಿಷ್ಠ ಮಟ್ಟದ ಅಗ್ನಿ ಸುರಕ್ಷತೆ ಮತ್ತು ಕಟ್ಟಡ ಸುರಕ್ಷತೆಯ ಕ್ರಮಗಳನ್ನು ಅಳವಡಿಸಲು ಅನುಕೂಲವಾಗುವಂತೆ ವಿವಿಧ ಹಂತಗಳಲ್ಲಿ ಸಂಬಂಧಪಟ್ಟ ಇಲಾಖಾ ಅಧಿಕಾರಿಗಳೊಂದಿಗೆ ನಡೆದ ಸಭೆಗಳಲ್ಲಿ ಚರ್ಚಿಸಲಾಗಿರುತ್ತದೆ. |
| ಆ. | ರಾಜ್ಯದಲ್ಲಿ ಇತ್ತೀಚಿನವರೆಗೆ ಎಷ್ಟು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಲೋಕೋಪಯೋಗಿ ಇಲಾಖೆಯಿಂದ "ನ್ಯಾಷನಲ್ ಬಿಲ್ಡಿಂಗ್ ಕೋಡ್" ನಿಯಮಾವಳಿಗಳನ್ವಯ ಕಟ್ಟಡ ಸುರಕ್ಷತಾ ಪ್ರಮಾಣ ಪತ್ರ ಪಡೆಯಲಾಗಿದೆ? (ಹಾಗಿದ್ದಲ್ಲಿ ಶಾಲೆಗಳ ಹೆಸರು ಸಹಿತ ಜಿಲ್ಲಾವಾರು ಮಾಹಿತಿ ನೀಡುವುದು) | |

**ಸಂಖ್ಯೆ**: ಇಪಿ 13 ಪಿಎಂಎ 2022

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು